## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1862
ಸದಸ್ಯರ ಹೆಸರು : ಶ್ರೀ ಶಶೀಲ್ ಜಿ. ನಮೋಶಿ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 15-03-2022
ಉತ್ತರಿಸುವ ಸಚಿವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು.

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ.</td><td>ಸರ್ಕಾರದ ವತಿಯಿಂದ ಅಂಗನವಾಡಿಗಳನ್ನು ತೆರೆಯಲು ನಿಗದಿಪಡಿಸಿರುವ ಮಾನದಂಡಗಳೇನು; ಕಲ್ಯಾಣ ಕರ್ನಾಟಕ ಭಾಗದ ಜಿಲ್ಲೆಗಳಲ್ಲಿರುವ ಅಂಗನವಾಡಿಗಳ ಮಾಹಿತಿ ಒದಗಿಸುವುದು.</td><td>ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ, ನಗರ ಹಾಗೂ ಗ್ರಾಮೀಣ ಪ್ರದೇಶದಲ್ಲಿ 400-800 ಜನಸಂಖ್ಯೆಗೆ ಒಂದು ಅಂಗನವಾಡಿ ಕೇಂದ್ರವನ್ನು ಹಾಗೂ ಗುಡ್ಡಗಾಡು ಪ್ರದೇಶದಲ್ಲಿ 300-800 ಜನಸಂಖ್ಯೆಗೆ ಒಂದು ಅಂಗನವಾಡಿ ಕೇಂದ್ರವನ್ನು ತೆರೆಯಬಹುದಾಗಿರುತ್ತದೆ. ಗ್ರಾಮೀಣ ಹಾಗೂ ನಗರ ಪ್ರದೇಶದ 150-400 ಜನಸಂಖ್ಯೆಗೆ ಒಂದು ಮಿನಿ ಅಂಗನವಾಡಿ ಕೇಂದ್ರ ಹಾಗೂ ಗುಡ್ಡಗಾಡು ಪ್ರದೇಶದ 150-300 ಜನಸಂಖ್ಯೆಗೆ ಒಂದು ಮಿನಿ ಅಂಗನವಾಡಿ ಕೇಂದ್ರವನ್ನು ತೆರೆಯಬಹುದಾಗಿದೆ.<br><br>ಕಲ್ಯಾಣ ಕರ್ನಾಟಕ ಭಾಗದ ಜಿಲ್ಲೆಗಳಲ್ಲಿರುವ ಅಂಗನವಾಡಿಗಳ ಕೇಂದ್ರಗಳ ವಿವರ ಈ ಕೆಳಕಂಡಂತಿದೆ.<br><br>
<table>
<tr><th>ಕ್ರ.ಸಂ</th><th>ಜಿಲ್ಲೆಯ ಹೆಸರು</th><th>ಮಿನಿ ಅಂಗನವಾಡಿ ಕೇಂದ್ರಗಳ ಸಂಖ್ಯೆ</th><th>ಮುಖ್ಯ ಅಂಗನವಾಡಿ ಕೇಂದ್ರಗಳ ಸಂಖ್ಯೆ</th></tr>
<tr><td>1.</td><td>ಬಳ್ಳಾರಿ</td><td>69</td><td>2828</td></tr>
<tr><td>2.</td><td>ಬೀದರ್</td><td>27</td><td>1898</td></tr>
<tr><td>3.</td><td>ಕಲಬುರಗಿ</td><td>73</td><td>3140</td></tr>
<tr><td>4.</td><td>ಯಾದಗಿರಿ</td><td>50</td><td>1387</td></tr>
<tr><td>5.</td><td>ಕೊಪ್ಪಳ</td><td>50</td><td>1850</td></tr>
<tr><td>6.</td><td>ರಾಯಚೂರು</td><td>41</td><td>2668</td></tr>
<tr><td colspan="2">ಒಟ್ಟು:</td><td>310</td><td>13771</td></tr>
</table>
</td></tr>
<tr><td>ಆ.</td><td>ಅಂಗನವಾಡಿ ಕಾರ್ಯಕರ್ತೆಯರು ಮತ್ತು ಅವರ ಸಹಾಯಕರಿಗೆ ನಿಗದಿಪಡಿಸಿದ ಕೆಲಸ ಕಾರ್ಯಗಳೇನು; ಅಂಗನವಾಡಿಯ ಕೆಲಸಗಳನ್ನು ಹೊರತುಪಡಿಸಿ ಇತರೆ ಯಾವ ಕೆಲಸಗಳನ್ನು ಇವರಿಗೆ ವಹಿಸಲಾಗುತ್ತಿದೆ; (ಮಾಹಿತಿ ನೀಡುವುದು)</td><td>ಅಂಗನವಾಡಿ ಕಾರ್ಯಕರ್ತೆಯರು ಮತ್ತು ಅವರ ಸಹಾಯಕಿಯರಿಗೆ ನಿಗದಿಪಡಿಸಿದ ಕೆಲಸ ಕಾರ್ಯಗಳ ಪಟ್ಟಿಯನ್ನು ಅನುಬಂಧದಲ್ಲಿ ಒದಗಿಸಿದೆ.<br><br>ಅಂಗನವಾಡಿಯ ಕೆಲಸಗಳನ್ನು ಹೊರತುಪಡಿಸಿ, ಚುನಾವಣೆ ಆಯೋಗದ ಸೂಚನೆ ಮೇರೆಗೆ ಅಂಗನವಾಡಿ ಕಾರ್ಯಕರ್ತೆಯರಿಗೆ BLO (Block Level Officer) ಕೆಲಸವನ್ನು ವಹಿಸಲಾಗುತ್ತಿದೆ.</td></tr>
</table>

ಇ. ಅಂಗನವಾಡಿ ಕಾರ್ಯಕರ್ತೆಯರು ಮತ್ತು ಅವರ ಸಹಾಯಕರಿಗೆ ನಿಗದಿಪಡಿಸಿರುವ ಮಾಸಿಕ ಸಂಬಳ ಮತ್ತು ಇತರೆ ಭತ್ಯೆಗಳ ವಿವರ ನೀಡುವುದು;

ಅಂಗನವಾಡಿ ಕಾರ್ಯಕರ್ತೆ ಮತ್ತು ಅಂಗನವಾಡಿ ಸಹಾಯಕಿಯರಿಗೆ ನಿಗದಿಪಡಿಸಿರುವ ಮಾಸಿಕ ಗೌರವಧನ ಈ ಕೆಳಕಂಡಂತಿದೆ.

(ರೂ.ಗಳಲ್ಲಿ)

| ವಿವರ | ಕೇಂದ್ರ ಸರ್ಕಾರದ ಗೌರವ ಧನ | ಕೇಂದ್ರ ಸರ್ಕಾರದ ಪಾಲು | ರಾಜ್ಯ ಸರ್ಕಾರದ ಪಾಲು | ರಾಜ್ಯ ಸರ್ಕಾರ ದಿಂದ ನೀಡು ತ್ತಿರುವ ಹೆಚ್ಚುವರಿ ಗೌರವಧನ | ಒಟ್ಟು |
|---|---|---|---|---|---|
| ಅಂಗನವಾಡಿ ಕಾರ್ಯಕರ್ತೆ | 4500 | 2700 | 1800 | 5500 | 10000 |
| ಅಂಗನವಾಡಿ ಸಹಾಯಕಿ | 2500 | 1500 | 1000 | 2750 | 5250 |
| ಮಿನಿ ಅಂಗನವಾಡಿ ಕಾರ್ಯಕರ್ತೆ | 3500 | 2100 | 1400 | 2750 | 6250 |

ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರಿಗೆ ಗೌರವಧನ ದೊಂದಿಗೆ ಈ ಕೆಳಕಂಡ ಸೌಲಭ್ಯಗಳನ್ನು ಸಹ ನೀಡಲಾಗುತ್ತಿದೆ.

- ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರು ಸೇವೆ ಯಲ್ಲಿದ್ದಾಗ ಮರಣ ಹೊಂದಿದ್ದಲ್ಲಿ ಕುಟುಂಬದ ಅವಲಂಬಿತರಿಗೆ ರೂ.50,000/- ಗಳ ಮರಣ ಪರಿಹಾರ. ಮಾತೃಪೂರ್ಣ ಯೋಜನೆಯಡಿ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರನ್ನು ಫಲಾನುಭವಿ ಎಂದು ಗುರುತಿಸಿ ಮಧ್ಯಾಹ್ನದ ಬಿಸಿ ಊಟವನ್ನು ನೀಡಲಾಗುತ್ತಿದೆ.
- 15 ದಿನಗಳ ಬೇಸಿಗೆ ರಜೆ ಹಾಗೂ 180 ದಿನಗಳ ಹೆರಿಗೆ ರಜೆ
- ಕೋವಿಡ್-19 ಸಾಂಕ್ರಮಿಕ ರೋಗವನ್ನು ತಡೆಗಟ್ಟುವ ಸಂಬಂಧ ಕೆಲಸವನ್ನು ಮಾಡುವಾಗ ಮೃತರಾದ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರಿಗೆ ರೂ.30.00 ಲಕ್ಷ ಪರಿಹಾರ ಧನವನ್ನು ನೀಡಲಾಗುತ್ತಿದೆ.
- ಎಲ್ಲಾ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರಿಗೆ ಕೋವಿಡ್-19ರ ನಿಮಿತ್ತ ವಿಶೇಷ ಪ್ಯಾಕೇಜ್ ಅಡಿಯಲ್ಲಿ ಒಂದು ಬಾರಿಗೆ ರೂ.2,000/- ಗಳ ಪ್ರೋತ್ಸಾಹ ಧನವನ್ನು ನೀಡಲಾಗಿರುತ್ತದೆ.
- ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರಿಗೆ ವೈದ್ಯಕೀಯ ವೆಚ್ಚ ಮರುಪಾವತಿ ಯೋಜನೆಯಡಿ ರೂ.50,000/-ಗಳು ನೀಡಲಾಗುತ್ತಿರುತ್ತದೆ.

| | | |
|---|---|---|
| ಈ. | ಅಂಗನವಾಡಿ ಕಾರ್ಯಕರ್ತೆಯರು ಹಾಗೂ ಸಹಾಯಕರಿಗೆ ಸರಿಯಾದ ಸಮಯಕ್ಕೆ ವೇತನ ಪಾವತಿಯಾಗದಿರಲು ಕಾರಣಗಳೇನು? | ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕರಿಗೆ ನಿಗದಿತ ಸಮಯದಲ್ಲಿ ಗೌರವಧನ ಪಾವತಿಸಲಾಗಿದೆ.<br><br>ಕೆಲವೊಮ್ಮೆ ಆಡಳಿತಾತ್ಮಕ ಕಾರಣ ಹಾಗೂ ಖಜಾನೆ-2 ತಂತ್ರಾಂಶದಲ್ಲಿನ ತಾಂತ್ರಿಕ ಕಾರಣದಿಂದಾಗಿ ಅನುದಾನ ಬಿಡುಗಡೆ ವಿಳಂಬವಾಗಿರುತ್ತದೆ.<br><br>ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರಿಗೆ ಸಕಾಲದಲ್ಲಿ ಗೌರವಧನವನ್ನು ಪಾವತಿಸುವಂತೆ ಎಲ್ಲಾ ಜಿಲ್ಲೆಗಳ ಉಪ ನಿರ್ದೇಶಕರುಗಳಿಗೆ ಹಾಗೂ ಎಲ್ಲಾ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಈಗಾಗಲೇ ಸೂಚನೆಯನ್ನು ನೀಡಲಾಗಿದೆ |

ಸಂ: ಮಮಇ 120 ಐಸಿಡಿ 2022

Halappa BB

**(ಆಚಾರ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರಿಕರ ಸಬಲೀಕರಣ ಸಚಿವರು.